# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಆರ್‌ಎನ್‌ಎಸ್ - 19

5ನೇ ವರ್ಷ 2ನೇ ಸಂಚಿಕೆ ಕೊಪ್ಪ 24-8-1986 ಭಾನುವಾರ ಬೆಲೆ 40 ಪೈಸೆ




## ಸುಳ್ಳು ಹೆಸರಲ್ಲಿ ಐಆರ್‌ಡಿಪಿ ಸಾಲ ತೆಗೆದು ಸಬ್ಸಿಡಿ ಹಣ ಗುಳುಂ—ಗ್ರಾಮಲೆಕ್ಕಿಗ ಸೆರೆ

ಕೊಪ್ಪ: ಕುದುರೆಗುಂಡಿಯ ಕರ್ನಾಟಕ ಬ್ಯಾಂಕಿನಲ್ಲಿ ಸುಮಾರು 70 ಜನರ (ಸುಳ್ಳು) ಹೆಸರಿನಲ್ಲಿ ಐ.ಆರ್.ಡಿ.ಪಿ. ಸಾಲಗಳನ್ನು ತೆಗೆದು ಸಬ್ಸಿಡಿ ಹಣವನ್ನು ಲಪಟಾಯಿಸಿ ಸುಮಾರು 3 ಲಕ್ಷ ರೂ. ಅವ್ಯವಹಾರ ನಡೆಸಿರುವ ಆರೋಪದ ಮೇಲೆ ತಲಮಕ್ಕಿ ಗ್ರಾಮ ಲೆಕ್ಕಿಗರಾಗಿದ್ದ ಯು. ಎ. ಮೋಹನ ಎಂಬವರನ್ನು ಕೊಪ್ಪ ಸರ್ಕಲ್ ಇನ್‌ಸ್ಪೆಕ್ಟರ್ ವೈ.ಡಿ. ಕೇಶವಾನಂದ ಆ. 18ರಂದು ಬಂಧಿಸಿದ್ದಾರೆ.

ಈ ಬಗ್ಗೆ ಕಳೆದ ವರ್ಷ ಬ್ಯಾಂಕಿನ ತನಿಖಾ ದಳದವರು ತನಿಖೆ ನಡೆಸಿ ಪ್ರಕರಣವನ್ನು ಮುಂದಿನ ಕ್ರಮಕ್ಕಾಗಿ ಕೊಪ್ಪ ಪೋಲೀಸರಿಗೆ ವಹಿಸಿದ್ದರೆನ್ನಲಾಗಿದೆ. ಆಗ ಮ್ಯಾನೇಜರ್ ಆಗಿದ್ದ ಕೃಷ್ಣಪ್ಪ ಅವರನ್ನು ಇನ್ನೂ ಬಂಧಿಸಿಲ್ಲವೆನ್ನಲಾಗಿದೆ.

## ಪ್ರಾ|| ಸಾರಿಗೆ ಅಧಿಕಾರಿಗಳಿಂದ ಸಾರ್ವಜನಿಕ ಸಂದರ್ಶನ

ಚಿಕ್ಕಮಗಳೂರು: ಇಲ್ಲಿನ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತಮ್ಮ ಕಚೇರಿಯಲ್ಲಿ ಪ್ರತಿ ತಿಂಗಳ 1 ಮತ್ತು 16ನೇ ತಾರೀಖುಗಳಂದು (ರಜಾ ದಿನಗಳಾಗಿದ್ದಲ್ಲಿ ಮುಂದಿನ ದಿನ) ಸಾರ್ವಜನಿಕರ ಕುಂದು ಕೊರತೆಗಳನ್ನು ವಿಚಾರಣೆ ಮಾಡುವರು. ಅಲ್ಲದೆ ಈ ಅವಕಾಶ ಬಳಸಿಕೊಂಡು ಸಾರ್ವಜನಿಕರು ಮೋಟಾರು ವಾಹನಗಳಿಗೆ ಸಂಬಂಧಪಟ್ಟ ಕುಂದು ಕೊರತೆಗಳನ್ನು ಖುದ್ದಾಗಿ ವಿಚಾರಿಸಬಹುದೆಂದು ಕೋರಲಾಗಿದೆ.

ಮಾರುಕಟ್ಟೆ ಕಮಿಶನ್ ಕುರಿತ

## ಸುಗ್ರೀವಾಜ್ಞೆಗೆ ಹೈಕೋರ್ಟ್ ಪುರಸ್ಕಾರ

ಕೃಷಿ ಉತ್ಪನ್ನಗಳ ಮಾರಾಟದ ಮೇಲಿನ ಕಮಿಷನ್‌ಗೆ ಸಂಬಂಧಿಸಿದಂತೆ ರಾಜ್ಯ ಸರ್ಕಾರ ಈಚೆಗೆ ಹೊರಡಿಸಿದ ಸುಗ್ರೀವಾಜ್ಞೆಯನ್ನು ರಾಜ್ಯ ಹೈಕೋರ್ಟ್ ಎತ್ತಿ ಹಿಡಿದಿದೆ.

ವ್ಯಾಪಾರವನ್ನು ನಿಯಂತ್ರಿಸುವ ನೆಪದಲ್ಲಿ ಸರ್ಕಾರವು ಕೊಳ್ಳುವವರ ಮೇಲೆ ಏಕಪಕ್ಷೀಯವಾಗಿ ಅಧಿಕ ಹೊರೆ ಹೊರಿಸಿದ್ದು ಇದರಿಂದ ಸಂವಿಧಾನದ ಉಲ್ಲಂಘನೆ ಆಗಿದೆ ಎಂದು ವಾದಿಸಿ 12 ರಿಟ್ ಅರ್ಜಿಗಳನ್ನು ಸಲ್ಲಿಸಲಾಗಿತ್ತು.

ಅವುಗಳನ್ನು ಆ. 5ರಂದು ವಜಾ ಮಾಡಿ ತೀರ್ಪು ನೀಡಿದ ನ್ಯಾಯಮೂರ್ತಿಗಳಾದ ಎಂ. ರಾಮಾ ಜೋಯಿಸ್ ಮತ್ತು ರಾಮಕೃಷ್ಣ ಅವರುಗಳು, "ಮಾರುಕಟ್ಟೆ ಶುಲ್ಕ ಮತ್ತು ಕಮಿಶನ್ ರೂಪದಲ್ಲಿ ತಾವು ತೆರುವ ಹಣವನ್ನು ಬೇರೆಯವರಿಗೆ ವರ್ಗಾಯಿಸಲು ರೈತರಿಗೆ ಆಸ್ಪದವಿಲ್ಲದ ಕಾರಣ ರೈತರ ಉತ್ಪನ್ನಗಳನ್ನು ಕೊಳ್ಳುವ ಖರೀದಿದಾರರಿಂದಲೇ ಈ ಮೊಬಲಗುಗಳ ವಸೂಲಿಗೆ ಅವಕಾಶ ಕಲ್ಪಿಸಲಾಗಿದೆ" ಎಂದು ಅಭಿಪ್ರಾಯಪಟ್ಟರು.

### ಎ.ಪಿ.ಎಂ.ಸಿ. ವತಿಯಿಂದಲೇ ಹಮಾಲಿ ಶುಲ್ಕ ಪಾವತಿ

ಶಿವಮೊಗ್ಗದ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಹಮಾಲಿ ಶುಲ್ಕವನ್ನು ರೈತರ ಪರವಾಗಿ ತಾನೇ ಪಾವತಿ ಮಾಡಲಿದ್ದು, ಇದರಿಂದ ರೈತರಿಗೆ ವರ್ಷಕ್ಕೆ 2-3 ಲಕ್ಷ ರೂ.ಗಳಷ್ಟು ಉಳಿತಾಯವಾಗಲಿದೆ. ಅಂತೆಯೇ ಬೆಳೆದ ಸ್ಥಳಗಳಿಂದ ಮಾರುಕಟ್ಟೆಗೆ ಕೃಷಿ ಉತ್ಪನ್ನಗಳನ್ನು ಸಾಗಿಸಲು ಸಾರಿಗೆ ವ್ಯವಸ್ಥೆ ಮಾಡಲು ಸಮಿತಿ ಉದ್ದೇಶಿಸಿದ್ದು ಇದಕ್ಕೆ ಸರ್ಕಾರದ ಒಪ್ಪಿಗೆಗೆ ಕಾಯಲಾಗುತ್ತಿದೆ.

ಈ ವಿಚಾರಗಳನ್ನು ಈಚೆಗೆ ಸಮಿತಿಯ ಮಾರಾಟ ಭವನದ ಉದ್ಘಾಟನಾ ಸಮಾರಂಭದಲ್ಲಿ ಮಾರುಕಟ್ಟೆಗಳ ಮುಖ್ಯಾಧಿಕಾರಿ ಗಂಗಾಧರಪ್ಪ ತಿಳಿಸಿದರು.

ಶಿವಮೊಗ್ಗ ಮಾರುಕಟ್ಟೆಯಲ್ಲಿ ಪ್ರತಿ ವರ್ಷ ಸುಮಾರು 30 ಕೋಟಿ ರೂ.ಗಳಷ್ಟು ಅಡಿಕೆ ವಹಿವಾಟು ನಡೆಯುತ್ತಿದೆ. ಇಲ್ಲಿ ರಾಜ್ಯದಲ್ಲೇ ಪ್ರಥಮ ಬಾರಿಗೆ ಕೇಂದ್ರೀಕೃತ ಟೆಂಡರ್ ಪದ್ಧತಿ ಜಾರಿಗೆ ತಂದಿದ್ದು ರೈತರಿಗೆ ಒಳ್ಳೆಯ ಬೆಲೆ ದೊರೆಯಲು ಅನುಕೂಲವಾಗಿದೆ ಎಂದು ಸಮಿತಿ ಕಾರ್ಯದರ್ಶಿ ಹೆಚ್.ಎಂ. ರಾಮಕೃಷ್ಣ ರೆಡ್ಡಿ ತಿಳಿಸಿದರು.

## ಬಿ.ಹೆಚ್. ಕೈಮರದಲ್ಲಿ ಸಿಪಿಐ ಶಾಖೆ ಉದ್ಘಾಟನೆ

ನ.ರಾ. ಪುರ: ಇಲ್ಲಿನ ಬಿ. ಹೆಚ್. ಕೈಮರದಲ್ಲಿ ಭಾರತ ಕಮ್ಯುನಿಸ್ಟ್ ಪಕ್ಷದ ಶಾಖೆ ಆ. 23ರಂದು ಆರಂಭವಾಯಿತು. ಉದ್ಘಾಟನೆ ನೆರವೇರಿಸಿದ ಜಿಲ್ಲಾ ಕಾರ್ಯದರ್ಶಿ ಬಿ. ಕೆ. ಸುಂದರೇಶ್ ಪಕ್ಷದ ಧ್ಯೇಯೋದ್ದೇಶಗಳನ್ನೂ ಹೋರಾಟದ ಇತಿಹಾಸವನ್ನೂ ವಿವರಿಸಿದರು.

## ಬಿಳಾಲುಕೊಪ್ಪ ಜೇಸೀಸ್: 2 ಯಶಸ್ವಿ ಕಾರ್ಯಕ್ರಮಗಳು

ಬಿಳಾಲುಕೊಪ್ಪ: ಇಲ್ಲಿನ ಜೇಸೀಸ್ ವತಿಯಿಂದ ಅಗಳಗಂಡಿ, ಜಯಪುರ ಮತ್ತು ಬಸರಿಕಟ್ಟೆ ಪ್ರೌಢಶಾಲೆಗಳಲ್ಲಿ "ಜವಾಬ್ದಾರಿಯುತ ಹಾಗೂ ಕ್ರಿಯಾಶೀಲ ಪೌರತ್ವದೆಡೆಗೆ" ಕಾರ್ಯಕ್ರಮ ಯಶಸ್ವಿಯಾಗಿ ನಡೆಯಿತು. ಈ ಅವಧಿಯಲ್ಲಿ ವಿದ್ಯಾರ್ಥಿಗಳಿಗೆ ಪ್ರಾಥಮಿಕ ಚಿಕಿತ್ಸೆ, ಅಂಚೆ-ದೂರವಾಣಿ, ಆರೋಗ್ಯ, ನಡವಳಿಕೆ, ಬ್ಯಾಂಕಿಂಗ್, ಜ್ಞಾಪಕಶಕ್ತಿ ಮುಂತಾದ ವಿಷಯಗಳ ಬಗ್ಗೆ ಜೇಸಿ ಸದಸ್ಯರು ತರಗತಿಗಳನ್ನು ನಡೆಸಿದರು.

ಸ್ವಾತಂತ್ರ್ಯ ದಿನಾಚರಣೆ ಅಂಗವಾಗಿ 6 ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ಬಸರಿಕಟ್ಟೆ ಪ್ರೌಢಶಾಲೆಯಲ್ಲಿ ರಾಷ್ಟ್ರಗೀತೆ ಹಾಡುವುದು, ಭಾಷಣ ಮತ್ತು ಪ್ರಬಂಧ ಸ್ಪರ್ಧೆಗಳನ್ನು ನಡೆಸಿ, ಪ್ರತಿಯೊಂದು ಶಾಲೆಯಲ್ಲೂ ತಲಾ 5 ಬಹುಮಾನಗಳನ್ನು ನೀಡಲಾಯಿತು.

ಸೆಪ್ಟೆಂಬರಿನಲ್ಲಿ 'ಜೇಸಿ ಸಪ್ತಾಹ'ದ ಅಂಗವಾಗಿ ಈ ಸಂಸ್ಥೆ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ.

## ಜಿಲ್ಲೆಯಲ್ಲಿ 6 ನಾಡ ಕಚೇರಿ ಆರಂಭ

ಜಯಪುರ: 'ನಾಡ ಕಚೇರಿ' ಎಂಬುದು ರಾಜ್ಯ ಸರ್ಕಾರ ಆಡಳಿತ ವಿಕೇಂದ್ರೀಕರಣ ದತ್ತ ಇಡುತ್ತಿರುವ ಒಂದು ಪ್ರಮುಖ ಹೆಜ್ಜೆ ಎಂದು ಆ. 15ರಂದು ಇಲ್ಲಿ ನಾಡ ಕಚೇರಿ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಹೆಚ್. ಜಿ. ಗೋವಿಂದ ಗೌಡ ಹೇಳಿದರು.

ಕಚೇರಿ ಉದ್ಘಾಟಿಸಿದ ಜಿಲ್ಲಾಧಿಕಾರಿಗಳು ಜನಸಾಮಾನ್ಯರ ಅನುಕೂಲಕ್ಕಾಗಿ ಜಿಲ್ಲೆಯಲ್ಲಿ ಇಂತಹ ಆರು ಕಚೇರಿಗಳನ್ನು ಆರಂಭಿಸಲಾಗುತ್ತಿದೆಯೆಂದರು. ಜಿಲ್ಲಾ ಕಚೇರಿಗೆ ಬಂದಿದ್ದ ಸಂದರ್ಶಕರೊಬ್ಬರು ಸಂದರ್ಶಕರ ಪುಸ್ತಕದಲ್ಲಿ **"ಜಿಲ್ಲಾ ಕೇಂದ್ರಕ್ಕೆ ಯಾವುದಾದರೂ ಅಗತ್ಯ ಕೆಲಸಗಳಿಗೆ ಬರುವುದೆಂದರೆ ಒಂದು ಯಾತ್ರಾ ಸ್ಥಳಕ್ಕೆ ಬಂದಂತೆ"** ಎಂದು ಬರೆದಿದ್ದುದನ್ನು ಗಮನಿಸಿ, ಇಂತಹ ಬದಲಾವಣೆಯ ಬಗ್ಗೆ ಯೋಚಿಸಿದ್ದಾಗಿ ತಿಳಿಸಿದರು.

ಪಂ|| ಮಂಡಳಿ ಅಧ್ಯಕ್ಷ ವೆಜ್ರಪ್ಪ ಮನವಿ ಸಲ್ಲಿಸಿದರು. ಜಿ. ಸುಬ್ಬರಾವ್, ಅನಂದರಾಮ ಭಟ್ಟ, ಆಚಾರ್ಯ (?) ಶ್ರೀನಿವಾಸ್ ಮುಂತಾದವರು ಮಾತನಾಡಿದರು. ತಹಸೀಲ್ದಾರ್ ಶ್ರೀನಿವಾಸ್ ಸ್ವಾಗತಿಸಿ, ರಾಜಾರಾವ್ ವಂದಿಸಿದರು.

(ವರದಿ: ಎಂ. ವಿ. ಗಂಗಾಧರ್.)

## ಮಾಮ್ಕೋಸ್‌ನಲ್ಲಿ ಆಗಸ್ಟ್ 30ರಂದು ಏಲಕ್ಕಿ ವ್ಯಾಪಾರ ಇದೆ

ಶಿವಮೊಗ್ಗ: ಇಲ್ಲಿನ ಮಲೆನಾಡು ಅಡಿಕೆ ಮಾರಾಟದ ಸಹಕಾರ ಸಂಘ (ಮಾಮ್‌ಕೋಸ್)ದಲ್ಲಿ 30-8-86ರಂದು ಏಲಕ್ಕಿ ವ್ಯಾಪಾರ ನಡೆಯುವುದಾಗಿ ಕಾರ್ಯದರ್ಶಿ ಎಸ್. ಕೃಷ್ಣರಾವ್ ತಿಳಿಸಿದ್ದಾರೆ.

# ಆಳುವವರಿಗೆ ಕೇಳಿಸದ ಅಧಿಕಾರ ವಿಕೇಂದ್ರೀಕರಣದ ಕೂಗು

ನಿವೃತ್ತ ಭೂಸೇನಾ ದಂಡನಾಯಕ ಜನರಲ್ ಎ. ಎಸ್. ವೈದ್ಯ ಅವರನ್ನು ಪುಣೆಯಲ್ಲಿ ಆಗಸ್ಟ್ 10ರ ಭಾನುವಾರ ಉಗ್ರಗಾಮಿಗಳು ಗುಂಡಿಟ್ಟು ಕೊಲೆ ಮಾಡಿದ್ದಾರೆ. ಇದು ಖಲಿಸ್ಥಾನವಾದಿ ಸಿಕ್ಖ ಭಯೋತ್ಪಾದಕರ ಕೃತ್ಯವೆನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಜ। ವೈದ್ಯ ಅವರು ಭೂಸೇನೆಯ ದಂಡನಾಯಕರಾಗಿದ್ದಾಗಲೇ ಅಮೃತಸರದಸ್ವರ್ಣದೇವಾಲಯದಿಂದ ಭಿಂದ್ರನ್‌ವಾಲೆ ಹಾಗೂ ಸಂಗಡಿಗರನ್ನು ನಿರ್ಮೂಲನ ಮಾಡುವ ಸಶಸ್ತ್ರ ಕಾರ್ಯಾಚರಣೆಯನ್ನು ಭಾರತದ ಸೈನ್ಯವು ನಡೆಸಿತ್ತು.

ಜ। ವೈದ್ಯ ಪಂಜಾಬಿನ ಸಂಬಂಧವಾಗಿ ನಡೆಯುತ್ತಿರುವ ಮಾರಣ ಹೋಮಕ್ಕೆ ಮೂರನೆ ದೊಡ್ಡ ಬಲಿ. ಮೊದಲನೆಯದ್ದು ಈ ದೇಶದ ಪ್ರಧಾನ ಮಂತ್ರಿ ಇಂದಿರಾ ಗಾಂಧಿಯವರದ್ದು, ಎರಡನೆಯದ್ದು ರಾಜೀವ ಗಾಂಧಿಯವರ ಜೊತೆ ಒಡಂಬಡಿಕೆ ಮಾಡಿಕೊಂಡ ಅಕಾಲಿದಳದ ನಾಯಕ ಹರಚಂದ್ ಸಿಂಗ್ ಲೋಂಗೋವಾಲ್ ಅವರದ್ದು. ಈ ನಡುವೆ ಒಂದಿಬ್ಬರು ಸಂಸತ್ ಸದಸ್ಯರ, ಪಕ್ಷ ನಾಯಕರ, ಪತ್ರಿಕಾ ಸಂಪಾದಕರ, ಪೋಲೀಸ್ ಅಧಿಕಾರಿಗಳ ಜೀವ ಬಲಿಯೂ ಸಂದಿದೆ. ನೂರಾರು ಅಮಾಯಕ ಪ್ರಯಾಣಿಕರ ವಧೆಯೂ ಆಗಿದೆ. ಅಸಂಖ್ಯಾತ ಸಿಕ್ಖ ಭಯೋತ್ಪಾದಕರು ಸೈನ್ಯದ ಹಾಗೂ ಪೋಲೀಸ್ ಬಲದ ಗುಂಡಿಗೆ ಆಹುತಿಯಾಗಿದ್ದಾರೆ.

ಪಂಜಾಬು ಸಮಸ್ಯೆ ನಮ್ಮ ರಾಜಕಾರಣಿಗಳ ಕೈಮೀರಿದೆ ಎಂಬುದನ್ನು ಇತ್ತೀಚಿನ ವಿದ್ಯಮಾನಗಳು ಸೂಚಿಸುತ್ತವೆ. ಪಂಜಾಬಿನ ಸಿಖ್ಖರು ಸಿಡಿದು ನಿಂತಿದ್ದಾರೆ ಎಂಬುದರಿಂದ 'ಭಾರತೀಯತ್ವ'ವನ್ನು ಮೈಗೂಡಿಸಿಕೊಂಡಿರುವ ನಮಗೆ ನೋವಾಗುತ್ತದೆ. ಸ್ವಾತಂತ್ರ್ಯ ಹೋರಾಟವು ಪ್ರಾರಂಭಗೊಂಡ ಈ ಶತಮಾನದ ಆದಿಯಿಂದ 'ಒಂದೇ ಭಾರತ'ದ ಕಲ್ಪನೆಯನ್ನು ಮೂಡಿಸಿಕೊಂಡು 1947ರಲ್ಲಿ ಅದು ಸಾಕಾರವಾದ ಬಳಿಕ ಮಾನಸಿಕವಾಗಿ ಅದನ್ನೇ ಪೋಷಿಸಿಕೊಂಡು ಬಂದೆವು. ಈ ಏಕತೆಯ ಕಲ್ಪನೆ ವಾಸ್ತವಿಕವಾಗಿ ಎಷ್ಟು ಹುಸಿ–ಎಷ್ಟು ಗಟ್ಟಿ ಎಂಬುದರ ಬಗ್ಗೆ ಚಿಂತನೆ–ವಿಮರ್ಶೆ ಒಮ್ಮೆಯೂ ಈ ನಾಡಿನಲ್ಲಿನಡೆಯಲಿಲ್ಲ. ಈ ದೇಶದ ಜನಸಮುದಾಯಗಳಲ್ಲಿ ಎಷ್ಟು ವೈವಿಧ್ಯತೆಯಿದೆ; ಭಾಷಾ ಸಂಬಂಧಿಯಾಗಿ, ಸಾಂಸ್ಕೃತಿಕವಾಗಿ, ಭೌಗೋಲಿಕವಾಗಿ ನಾವೆಲ್ಲ ಎಷ್ಟರ ಮಟ್ಟಿಗೆ ಒಂದು–ಎಂಬ ಬಗ್ಗೆ ವಿಚಾರ ವಿಮರ್ಶೆ ಮಾಡಲಿಲ್ಲ. ಈ ವಿಚಾರದಲ್ಲಿ ರಾಜಕಾರಣಿಗಳು ಮೂಗುದಾರ ಹಾಕಿ ನಮ್ಮನ್ನು ನಡೆಸಿದರು. ಅವರು ಒಯ್ದಲ್ಲಿಗೆ ನಾವು ನಡೆದೆವು.

ಇದರ ಪರಿಣಾಮವಾಗಿಯೇ ಪಂಜಾಬಿನ ಕ್ಷೋಭೆಗೆ ಪರಿಹಾರ ಕಷ್ಟವಾಗಿದೆ. ಪಂಜಾಬಿನಲ್ಲಿ, ಸಿಕ್ಖರು ಸಿಡಿದು ನಿಂತಾಗ ನಮಗೆ ಆತಂಕವಾಗುತ್ತದೆ, ಪಂಜಾಬಿನಲ್ಲಿ ಹಿಂದುಗಳ ನರಮೇಧ ನಡೆದಾಗ ನಾವು ಗಾಬರಿಗೊಳ್ಳುತ್ತೇವೆ. ದೆಹಲಿಯಲ್ಲಿ ಈ ದೇಶದ ಪ್ರಧಾನಮಂತ್ರಿಯನ್ನು ಅವರ ಮನೆಯ ಮುಂದೆಯೇ ಗುಂಡಿಟ್ಟು ಕೊಂದಾಗ ನಾವು ಕ್ರೋಧೋದ್ದೀಪಿತರಾಗುತ್ತೇವೆ. ಪ್ರತೀಕಾರವಾಗಿ ದೆಹಲಿಯಲ್ಲಿ ಕೈಗೆ ಸಿಕ್ಕಿದ ಸಿಕ್ಖರನ್ನು ಕೊಂದು ಪಂಜಾಬಿನ ಸಮಸ್ಯೆಗೆ ಪರಿಹಾರ ಹುಡುಕಲು ಯತ್ನಿಸುತ್ತೇವೆ. ಪುಣೆಯಲ್ಲಿ ನಿವೃತ್ತ ದಂಡನಾಯಕ ಜನರಲ್ ವೈದ್ಯರನ್ನು ಭಯೋತ್ಪಾದಕರು ಕೊಚ್ಚಿ ಹಾಕಿದಾಗ ನಮಗೆ ದುಃಖವಾಗುತ್ತದೆ. ಭಯೋತ್ಪಾದಕರ ಒಂದು ಗುಂಡಿಗೆ ನಾಲ್ಕು ಗುಂಡುಗಳ ಪ್ರತ್ಯುತ್ತರ ಕೊಡಲು ಯತ್ನಿಸುತ್ತೇವೆ. ಅವರು ತೆಗೆದ ಒಂದು ಜೀವಕ್ಕೆ ನಾಲ್ಕು ಜೀವ ತೆಗೆದು ಪರಿಹಾರ ಕಂಡುಕೊಳ್ಳಲು ಯತ್ನಿಸುತ್ತೇವೆ.

ನಾವು ಹೊರಟ ದಾರಿ ಸರಿಯೇ ಎಂದು ಕೊಂಚ ನಿಂತು ಯೋಚಿಸುವ ವ್ಯವಧಾನ ಈ ಸಮಾಜದಲ್ಲಿ ಯಾರಿಗೂ ಇಲ್ಲವಾಗಿದೆ. ಅಂಥ ಮುತ್ಸದ್ದಿತನ ನಮ್ಮ ರಾಜಕಾರಣಿಗಳಿಗೂ ಇಲ್ಲವಾಗಿದೆ. ಯಾರಿಗೆಲ್ಲ ಹೊಡೆಯಬೇಕು ಎಂದು ಭಯೋತ್ಪಾದಕರು ಪಟ್ಟಿ ತಯಾರಿಸಿ ಹೊರಟರೆ ಅಂಥವರನ್ನೆಲ್ಲ ಭದ್ರ ಕೊಠಡಿಯೊಳಗಡೆ ಕೂಡಿ ಹಾಕಿ ಕಾಪಾಡುವುದು ಸಾಧ್ಯವೇ ಎಂಬ ಬಗ್ಗೆ ನಮ್ಮಲ್ಲಾರೂ ಆಲೋಚಿಸಿದ್ದಿಲ್ಲ. ಸಾವಿರಾರು ಮಂದಿಗೆ ಹೀಗೆ ಸಶಸ್ತ್ರ ಕಾವಲುಗಾರರನ್ನು ಪೂರೈಸುವ ಸಾಧ್ಯತೆ ಬಗ್ಗೆ ಚಿಂತಿಸಿದ್ದಿಲ್ಲ. ರಸ್ತೆಯಲ್ಲಿ ಸಂಚರಿಸುವ ಸಾವಿರಾರು ಬಸ್ಸು, ಕಾರು, ಲಾರಿ, ರೈಲುಗಳ, ನೂರಾರು ವಿಮಾನಗಳ ಪ್ರಯಾಣಿಕರಿಗೆ ಜೀವ ರಕ್ಷಣೆಯ ಗ್ಯಾರಂಟಿ ಕೊಡುವುದು ಶಕ್ಯವೇ ಎಂಬ ಬಗ್ಗೆ ತಲೆ ಕೆಡಿಸಿಕೊಂಡಿದ್ದಿಲ್ಲ. ಸರೋವರದ ಮಧ್ಯೆ, ಕ್ರಿಮಿಯೂ, ಬೆಳಕೂ ಸೋಂಕದ ಭದ್ರ ಭವನದೊಳಗೆ ಕೂತ ಪರೀಕ್ಷಿತನನ್ನು ತಕ್ಷಕ ಕೊಂದ ಪುರಾಣದ ಪಾಠ ನಮಗಿನ್ನೂ ಅರ್ಥವಾಗಿಲ್ಲ.

ಈ ಆತಂಕ, ಈ ಭಯ, ಈ ಕ್ರೋಧ ನಿವಾರಣೆ ಆಗಬೇಕಿದ್ದರೆ ಶಾಂತಿಯ ಗ್ಯಾರಂಟಿ ಬೇಕು. ಅದು ಪ್ರತಿ ಹಿಂಸೆಯಿಂದ ಖಂಡಿತಾ ಹುಟ್ಟುವುದಿಲ್ಲ. ಇದರರ್ಥ ಭಯೋತ್ಪಾದಕರ ಹಿಂಸೆ ಸರಿಯೆಂದಲ್ಲ. ಅದನ್ನಾರೂ ಸಮರ್ಥಿಸುವುದಿಲ್ಲ. ನಮ್ಮ ರಾಷ್ಟ್ರಪತಿ ಗ್ಯಾನಿ ಜೈಲ್‌ಸಿಂಗರು ವಿಷಾದದಿಂದ ಹೇಳುವಂತೆ **ಭಯೋತ್ಪಾದಕತೆಯ ಮೂಲವೇನು?** ಎಂಬುದರ ಶೋಧಕ್ಕೆ ಯಾರೂ ಮನ ಮಾಡಿಲ್ಲ.

ಹೀಗೆ ಮೂಲವನ್ನು ಹುಡುಕುವುದಕ್ಕೆ, ಪಂಜಾಬಿನ ಕ್ಷೋಭೆಗೆ ಪರಿಹಾರ ಕಂಡುಕೊಳ್ಳುವುದಕ್ಕೆ ನಾವು ರಾಷ್ಟ್ರೀಯ ಸಮಗ್ರತೆ ಹಾಗೂ ಏಕತೆಗಳ ಬಗ್ಗೆ ಕಟ್ಟಿಕೊಂಡ ಕಣ್ಪಟ್ಟಿ ಅಡ್ಡಿ ಮಾಡುತ್ತದೆ. ನಾವು ಚಿತ್ರಿಸಿಕೊಂಡ ರಾಷ್ಟ್ರೀಯ ಏಕತೆಯ ಕನಸಿನ ರಾಜ್ಯದಲ್ಲಿ ಪಂಜಾಬಿನವರ ಆಶೋತ್ತರಗಳಿಗೆ, ಅಂತಹ ಬೇರೆ ಇತರ ಬೇಡಿಕೆಗಳಿಗೆ ಜಾಗವಿಲ್ಲ. ಆದ್ದರಿಂದಲೇ ಈ ಸಮಸ್ಯೆ ಬೆಳೆದು ಭೂತಾಕಾರವಾಗಿದೆ.

**ಪಂಜಾಬಿನ ಸಮಸ್ಯೆ ಅಧಿಕಾರ ಕೇಂದ್ರೀಕರಣದಿಂದ ಹುಟ್ಟಿದೆ.** ಇದನ್ನು ನಾವು ಹತ್ತಾರು ಬಾರಿ ಹೇಳಿದ್ದೇವೆ. ಇಂದು ಪಂಜಾಬಿನಲ್ಲಿ ಆದದ್ದು ನಾಳೆ ಇನ್ನೊಂದೆಡೆ ಆದೀತು. ಅಧಿಕಾರವನ್ನು ದಿಲ್ಲಿಯ ದೊರೆಗಳು ತಮ್ಮ ಕೈಯೊಳಗೇ ಜತನದಿಂದ ಕಾಪಾಡಿದ್ದು, ಜನರಿಗೆ ಹಂಚಿ ಕೊಡಲು ನಿರಾಕರಿಸಿದ್ದು, ಈ ನೆಲದಲ್ಲಿ ಜನತಂತ್ರವು ತಂತ್ರಗಾರಿಕೆಯವರಿಗೆ ಒಲಿದು ತನ್ನ ಅರ್ಥವನ್ನೆಲ್ಲ ಕಳೆದುಕೊಂಡದ್ದು ಪಂಜಾಬು ಸಮಸ್ಯೆಯ ಮೂಲ. ಮೇಲು–ಮೇಲಿನ ಉಸ್ತುವಾರಿಯನ್ನು ಮಾತ್ರವೇ ಕೇಂದ್ರ ಸರ್ಕಾರ ಮಾಡತಕ್ಕದ್ದು. ಉಳಿದೆಲ್ಲ, ಜನಜೀವನವನ್ನು ತಟ್ಟುವ ಆಡಳಿತೆಯನ್ನು ಸ್ಥಳೀಯ ಆಡಳಿತಕ್ಕೇ ಬಿಟ್ಟುಕೊಡತಕ್ಕದ್ದು. ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಕಾನೂನು ರಚನೆ ಅಧಿಕಾರವೆಲ್ಲ ಸ್ಥಳೀಯವಾಗಿ ಇರತಕ್ಕದ್ದು. ಅದನ್ನೆಲ್ಲ ಜನ ಮನದ ಸ್ಪಂದನ ಅರಿತ, ಜನರ ಸಮಸ್ಯೆಯನ್ನು ಹತ್ತಿರದಿಂದ

(3ನೇ ಪುಟಕ್ಕೆ)

# ಕುರಿ, ಕೋಳಿ ಬೇಡ — ವಸತಿ ಶಾಲೆ ಕೊಡಿ!

ವರ್ಷದಿಂದ ವರ್ಷಕ್ಕೆ, ದಶಕದಿಂದ ದಶಕಕ್ಕೆ, ಶತಮಾನದಿಂದ ಶತಮಾನಕ್ಕೆ— ಕತ್ತಲಿಂದ ಕತ್ತಲಿಗೇ ಪಯಣಿಸುತ್ತಾ ಬಂದಿರುವ ಈ ದೇಶದ ದಲಿತರ ಅಂತ್ಯವಿಲ್ಲದ ಬವಣೆಗಳ ಬದುಕಿನಲ್ಲಿ ನಿಜವಾದ ಸ್ವಾತಂತ್ರ್ಯದ ಹೊಂಬಿಸಿಲು ಮೂಡಿಸದ, ಸಮತೆಯ ಹೂವು ಅರಳಿಸದ ಈ 'ಸ್ವಾತಂತ್ರ್ಯ ದಿನಾಚರಣೆ'ಗೆ ಅರ್ಥವಿಲ್ಲ; ಅದು ಮತ್ತೊಂದು **ಕತ್ತಲ ದಿನಾಚರಣೆ** ಅಷ್ಟೇ— ಎಂದು ದಲಿತ ಸಂಘರ್ಷ ಸಮಿತಿ ಭಾವಿಸುತ್ತದೆ.

ಮನುಷ್ಯನ ಬದುಕನ್ನು ರೂಪಿಸುವ ಮೂಲಭೂತ ಸಂಗತಿ ವಿದ್ಯೆ–ಶಿಕ್ಷಣ. ಆದರೆ ಈ ದೇಶದಲ್ಲಿ ಗ್ರಾಮೀಣ ಬಡ ದಲಿತರ ಸರ್ವಾಂಗೀಣ ಶಿಕ್ಷಣ ವಿಕಾಸಕ್ಕೆ ಸರ್ಕಾರಗಳು ಯಾವುದೇ ಮಹತ್ವ ನೀಡಿಲ್ಲ. ಅಷ್ಟೇಕೆ, ಈ ಬಗ್ಗೆ ಒಂದು ಸಮಗ್ರ ಅಧ್ಯಯನ ಯೋಜನೆ ಕೂಡ ರೂಪಿತವಾದುದಿಲ್ಲ.

ಅದರ ಬದಲು, ಇಲ್ಲಿನ ಆಳುವ ವರ್ಗಗಳು ಕುರಿ, ಕೋಳಿ, ತಾಳಿ, ಸಾಲದಂತಹ [illegible]ನೆ ಯೋಜನೆಗಳ ಕನ್ನಡಿಯಲ್ಲಿ ಕನಕ ತೋರಿಸಿ[illegible] ಅನಕ್ಷರಸ್ಥ ಜನ ಸಮುದಾಯವನ್ನು ತಮ್ಮ ಆಳ್ವಿಕೆಯನ್ನು ನಿರಂಕುಶವಾಗಿ ಮುಂದುವರಿಸಿಕೊಂಡು ಹೋಗಲು ಪ್ರಮುಖ ಸಾಧನವನ್ನಾಗಿ ಮಾಡಿಕೊಂಡು ಸಾಗಿವೆ. ಇದಕ್ಕೆ ಯಾವ ಪಕ್ಷದ ಸರ್ಕಾರವೂ ಹೊರತಲ್ಲ.

ಹಳ್ಳಿಗಾಡಿನ ದಲಿತರ ದಟ್ಟ ದಾರಿದ್ರ್ಯದಿಂದಾಗಿ ಮಕ್ಕಳನ್ನು ಸಮರ್ಪಕವಾಗಿ ಶಾಲೆಗೆ ಕಳಿಸಲು, ವಿದ್ಯಾವಂತರನ್ನಾಗಿ ಮಾಡಲು ಆಗುತ್ತಿಲ್ಲ. ಆದ್ದರಿಂದ **ಕಡೇ ಪಕ್ಷ ಪ್ರತೀ ಹೋಬಳಿಗೊಂದು, ಕನಿಷ್ಠ ನೂರು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ಕೊಡಿಸಬಲ್ಲ ವಸತಿ ಶಾಲೆ ಕೊಡುವಂತೆ** ದಲಿತ ಸಂಘರ್ಷ ಸಮಿತಿ 1985ರ ಏಪ್ರಿಲ್ 14ರಂದು ನಡೆದ ಅಂಬೇಡ್ಕರ್ ದಿನಾಚರಣೆಯ ದಿನದಿಂದ ಸರ್ಕಾರವನ್ನು ಒತ್ತಾಯಿಸುತ್ತ ಬಂದಿದ್ದರೂ, ಈವರೆಗೂ ಅದರ ಫಲ ಸೊನ್ನೆಯಾಗಿದೆ. ಆದ್ದರಿಂದ ಸರ್ಕಾರಗಳು ತಮ್ಮ ಸೋಗು ಮೆರೆಸುವ ಈ ಸ್ವಾತಂತ್ರ್ಯ ದಿನಾಚರಣೆಯಂದು ದಲಿತ ಸಂಘರ್ಷ ಸಮಿತಿ ಇದೇ ಬೇಡಿಕೆಯನ್ನೇ ಮತ್ತೊಮ್ಮೆ ಒತ್ತಾಯಿಸುತ್ತದೆ—

"ಎಲೈ ಸರ್ಕಾರವೇ, ಇನ್ನಾದರೂ ಕಣ್ಣು ತೆರೆಯಲಾರೆಯಾ? ಕತ್ತಲ ಕೂಪದ ಕಾಡು ಮಲ್ಲಿಗೆಗಳಿಗೆ ಅಕ್ಷರಗಳ ಬೆಳಕ ಕಾಣಿಸಲಾರೆಯಾ?" ಎಂದು.

* * *

(ಚಿಕ್ಕಮಗಳೂರು ಜಿಲ್ಲಾ ಸಮಿತಿ ಮತ್ತು ಜಿಲ್ಲಾ ದಲಿತ ವಿದ್ಯಾರ್ಥಿ ಒಕ್ಕೂಟಗಳು ಹೊರಡಿಸಿದ ಕರಪತ್ರದಿಂದ—ಸಂ.)

## ಮಕ್ಕಳ ಪ್ರಶ್ನೆಗಳಿಗೆ ಬಿಜಾಪುರ ಸಾಹಿತ್ಯ ಅಕಾಡೆಮಿ ಉತ್ತರ

ತಮಗೆ ತಿಳಿಯದ ಸಂಗತಿಗಳನ್ನು ತಿಳಿದುಕೊಳ್ಳುವ ಸಹಜ ಕುತೂಹಲದಿಂದ ಮಕ್ಕಳು ಹಿರಿಯರಲ್ಲಿ ಪ್ರಶ್ನೆ ಹಾಕುವುದು ಸಾಮಾನ್ಯ. ಅನೇಕ ಸಂದರ್ಭಗಳಲ್ಲಿ ಇಂತಹ ಪ್ರಶ್ನೆಗಳಿಗೆ ಉತ್ತರ ತಿಳಿಯದೆ, ಇಲ್ಲವೆ ತಿಳಿದೂ ತಮ್ಮ ಕಾರ್ಯಭಾರಗಳ ನಡುವೆ ಎಷ್ಟೋ ಪಾಲಕರು ಉತ್ತರ ಹೇಳದೆ, ಅತ್ತ ಲಕ್ಷ್ಯ ಹರಿಸದೆ ಇರುವುದೂ ಉಂಟು. ಅಥವಾ ಉತ್ತರ ಹೇಳುವ ಮನಸ್ಸಿದ್ದರೂ ಹೇಗೆ ಪರಿಹರಿಸಬೇಕು ಎಂದು ಹೊಳೆಯದಿರಬಹುದು. ಇದರಿಂದ ಮಕ್ಕಳ ಮುಗ್ಧ ಮನಸ್ಸಿನ ಮೇಲೆ ಪರಿಣಾಮ ಉಂಟಾಗಿ ತಮ್ಮ ವಿಚಾರವನ್ನು ಹತ್ತಿಕ್ಕಿಕೊಳ್ಳುವ ಪರಿಸ್ಥಿತಿ ಏರ್ಪಡಬಹುದು. ಮಕ್ಕಳನ್ನು 'ಈ ಪ್ರಶ್ನೆ ಹಾಕಬೇಡ', 'ಆ ಪ್ರಶ್ನೆ ಹಾಕಬೇಡ' ಎಂದು ಹೇಳುವುದೂ ಸಾಧುವಲ್ಲ.

ಪ್ರಶ್ನೆಯೇ ಪ್ರಗತಿಯ ಸೋಪಾನವಾದ್ದರಿಂದ ಪ್ರಶ್ನೆ ಹಾಕಿಕೊಳ್ಳುವುದರ ಮೂಲಕ ಮಾನವ ಎಷ್ಟೋ ಸಮಸ್ಯೆಗಳನ್ನು ನಿವಾರಿಸಿಕೊಳ್ಳಬಲ್ಲ. ಇಂತಹ ಪ್ರಶ್ನೆಗಳ ಸರಮಾಲಿಗೆ ಕೊನೆಯೇ ಇಲ್ಲ. ಈ ಸಮಸ್ಯೆಯನ್ನು ಪರಿಹರಿಸಲು ಬಿಜಾಪುರದ ಮಕ್ಕಳ ಸಾಹಿತ್ಯ ಅಕಾಡೆಮಿ ಮಕ್ಕಳಿಗಾಗಿ **ಪ್ರಶ್ನಾವಳಿ ಯೋಜನೆಯೊಂದನ್ನು** ರೂಪಿಸಿದೆ.

ಈ ಯೋಜನೆಯಂತೆ ಹದಿನಾಲ್ಕು ವರ್ಷ ವಯೋಮಿತಿಯೊಳಗಿನ ಮಕ್ಕಳು ಕೇಳಿದ ಯಾವುದೇ ವಿಷಯದ ಕುರಿತ ಪ್ರಶ್ನೆಗಳನ್ನು ಪಾಲಕರು ಬರೆದು, **ಅಧ್ಯಕ್ಷರು, ಕರ್ನಾಟಕ ಮಕ್ಕಳ ಅಕಾಡೆಮಿ,** ಬಾಲಭಾರತಿ, ಕಾಬ್ರಾಜಿ ಬಜಾರ್, ಬಿಜಾಪುರ—1, ಇವರಿಗೆ ಬರೆದು ಕಳಿಸಿದಲ್ಲಿ ಅವುಗಳಿಗೆ ಸಮಾಧಾನಕರವಾದ ಉತ್ತರಗಳನ್ನು ತಜ್ಞರಿಂದ ಪಡೆದು ಪುಸ್ತಕ ರೂಪದಲ್ಲಿ ಸಚಿತ್ರವಾಗಿ ಪ್ರಕಟಿಸಲಾಗುವುದು. ಈ ಯೋಜನೆಯಿಂದ ಕನ್ನಡ ನಾಡಿನ ಎಲ್ಲಾ ಮಕ್ಕಳಿಗೆ ಮತ್ತು ಹೆತ್ತವರಿಗೆ ಪ್ರಯೋಜನವಾಗಲಿದೆ ಎಂದು ಅಕಾಡೆಮಿ ಅಧ್ಯಕ್ಷರಾದ ಸಿಸು ಸಂಗಮೇಶ ತಿಳಿಸಿದ್ದಾರೆ.

## ಓದುಗರ ಪತ್ರಗಳು

# "ವ್ಯವಸಾಯ ಸೇವಾ ಸಹಕಾರ ಸಂಘಗಳು ಮತ್ತು ಡಿ. ಸಿ. ಸಿ. ಬ್ಯಾಂಕ್ ನಡುವಿನ ವಿರಸ ಕೊನೆಗಾಣಲಿ"

ಮಾನ್ಯರೆ,

ವ್ಯವಸಾಯ ಸೇವಾ ಸಹಕಾರ ಸಂಘಗಳ ಆಡಳಿತ ನೋಡಿಕೊಳ್ಳಲು ಸಂಘದ ಸರ್ವ ಸದಸ್ಯರಿಂದ ಚುನಾಯಿತರಾದ ನಿರ್ದೇಶಕ ಮಂಡಳಿ ಇದ್ದು, ಅವಶ್ಯಕ ಸಿಬ್ಬಂದಿಗಳನ್ನು ಕಾಲ ಕಾಲಕ್ಕೆ ಈ ಮಂಡಳಿಯೇ ಕಾನೂನು ಪ್ರಕಾರ ನೇಮಕ ಮಾಡಿಕೊಂಡು ವ್ಯವಹಾರ ನಡೆಸುತ್ತಿರುವುದು ಹಲವು ವರ್ಷಗಳಿಂದ ನಡೆದುಕೊಂಡು ಬಂದಿದೆ.

ಆದರೆ ಇತ್ತೀಚೆಗೆ ಚಿಕ್ಕಮಗಳೂರು ಜಿಲ್ಲಾ ಕೇಂದ್ರ ಬ್ಯಾಂಕಿನವರು ರಿಜಿಸ್ಟ್ರಾರ್ ಮೂಲಕ 'ಕಾಮನ್ ಕೇಡರ್ ಸಮಿತಿ' ಎಂಬುದನ್ನು ರಚಿಸಿಕೊಂಡು ತನ್ಮೂಲಕ ಸಹಕಾರ ಸಂಘಗಳು ಅವರ ಕಾನೂನಿಗೆ ಒಳಪಟ್ಟು ನಡೆದುಕೊಳ್ಳಬೇಕು, ಇಲ್ಲವಾದರೆ ಜಿಲ್ಲಾ ಸಹಕಾರ ಬ್ಯಾಂಕಿನಿಂದ ರೈತರಿಗೆ ನೀಡುವ ಸಾಲ ಸೌಲಭ್ಯಗಳನ್ನ ಸ್ಥಗಿತವಾಗುವುದೆಂದು ಸಹಕಾರ ಸಂಘಗಳಿಗೆ ತಿಳುವಳಿಕೆ ನೀಡಿದ್ದಾರೆ. ಹಾಗೆಯೇ, ಸಹಕಾರ ಸಂಘಗಳ ಕಾರ್ಯದರ್ಶಿಗಳ ವೇತನವನ್ನು ಸಹಕಾರ ಸಂಘದಲ್ಲಿ ನೀಡಬಾರದು. ಅವರ ವೇತನದ ಶೇಕಡಾ 90 ಭಾಗವನ್ನು ಕಾಮನ್ ಕೇಡರ್ ಸಮಿತಿ ಲೆಖ್ಖಕ್ಕೆ 3 ತಿಂಗಳ ಮುಂಚೆ ಜಮಾ ಮಾಡಬೇಕು. ಅದಕ್ಕೆ ಉಳಿದ ಶೇ. 10 ಭಾಗ ಸೇರಿಸಿ ಕಾರ್ಯದರ್ಶಿಗಳಿಗೆ ಕಾ. ಕೇ. ಸಮಿತಿಯೇ ವೇತನ ನೀಡುವುದಾಗಿ ತಿಳಿಸಿದ್ದಾರೆ. ಮತ್ತು ತಮಗೇ ಕಾರ್ಯದರ್ಶಿಗಳ ಮೇಲಿನ ಅಧಿಕಾರವಿರುವುದೆಂದು, ಹಲವು ಸಹಕಾರ ಸಂಘಗಳ ಕಾರ್ಯದರ್ಶಿಗಳನ್ನು ವರ್ಗ ಮಾಡಿ ಆದೇಶ ಹೊರಡಿಸಿದ್ದಾರೆ. ಸಹಕಾರ ಸಂಘಗಳು ಅವರ ಅನುಮತಿ ಇಲ್ಲದೇ ಯಾರನ್ನೂ ನೇಮಕ ಮಾಡಿಕೊಳ್ಳುವಂತಿಲ್ಲ.

'ಇದರಿಂದ ಆಡಳಿತ ಕೇಂದ್ರೀಕರಣವಾಗುವುದರ ಜೊತೆಗೆ, ಆಡಳಿತ ಹಸ್ತಕ್ಷೇಪವಾಗುತ್ತದೆ. ಈಗಿನ ಜನತಾದಳಿತ ಸರ್ಕಾರದಲ್ಲೂ ಅಧಿಕಾರ ಹಸ್ತಕ್ಷೇಪ ಮಾಡುವುದು ಸೂಕ್ತವಾಗಲಾರದು. ಈ ಬಗ್ಗೆ ರಿಜಿಸ್ಟ್ರಾರ್‌ರವರನ್ನು ಒತ್ತಾಯಿಸಿ ಮಾಡಿಕೊಂಡ ಸುತ್ತೋಲೆ ನೇರೆ, ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದ್ದು 'ನ್ಯಾಯಾಲಯವು ಸುತ್ತೋಲೆಯನ್ನು ಜಾರಿಗೆ ಕೊಡದಂತೆ ತಡೆ ಹಿಡಿದಿತ್ತು. ಈಗ ಈಯಾಜ್ಞೆ ತೆರವಾಗಿದ್ದು, ಪುನಃ ಚಿಕ್ಕಮಗಳೂರು ಜಿಲ್ಲೆಯ ಜಿಲ್ಲಾ ಬ್ಯಾಂಕಿನವರು ಅದನ್ನು ಜಾರಿಗೆ ಕೊಡುತ್ತಿದ್ದಾರೆ. ಪಕ್ಕದ ಶಿವಮೊಗ್ಗ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಅದು ಜಾರಿಯಲ್ಲಿಲ್ಲ.

ಈ ಸುತ್ತೋಲೆಯನ್ನು ವಿಮರ್ಶಿಸಿ ಸಹಕಾರ ಸಂಘಗಳವರು ಪುನಃ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಲ್ಲಿಸಿದ್ದಾರೆ, ಹಾಗೂ ನ್ಯಾಯಾಲಯದಿಂದ ಇಂಟರಿಮ್ ರಿಲೀಫ್ ಕೇಳಿದ್ದಾರೆ. ಈ ಬಗ್ಗೆ ಸಂಬಂಧಪಟ್ಟವರಿಗೆ ನ್ಯಾಯಾಲಯದಿಂದ ನೋಟೀಸ್ ಜಾರಿಯಾಗಿದೆ. ಟ್ರಾನ್ಸ್‌ಫರ್ ಮಾಡಿರುವ ಕಾರ್ಯದರ್ಶಿಗಳು ಕೆಲವರು ಅವರ ತೊಂದರೆಯಿಂದ ರಜಾ ಹಾಕಿದ್ದು, ಈ ಮಧ್ಯೆ ಕೇಂದ್ರ ಬ್ಯಾಂಕಿನಿಂದ ಸಾಲ ಮಂಜೂರಾತಿ ನಿಲ್ಲಿಸಿ ರೈತರಿಗೆ ಸಾಕಷ್ಟು ತೊಂದರೆ ಆಗಿದೆ.

ಕಾನೂನು ಪ್ರಕಾರ ಸದಸ್ಯರಿಗೆ ಸಾಲ ಮಂಜೂರಾತಿ ಮಾಡುವುದೇ ಕೇಂದ್ರ ಸಹಕಾರ ಬ್ಯಾಂಕಿನ ಮುಖ್ಯ ಉದ್ದೇಶವಾಗಿದ್ದು, ಸಹಕಾರ ಸಂಘಗಳ ರಿಸರ್ವ್ ಫಂಡ್, ಪ್ರಾವಿಡೆಂಟ್ ಫಂಡ್ ಇತ್ಯಾದಿ ಹಣವನ್ನೆಲ್ಲಾ ಜಿಲ್ಲಾ ಕೇಂದ್ರ ಬ್ಯಾಂಕಿನಲ್ಲಿಡಿಸಿಕೊಂಡು, ರೈತರಿಂದ ಶೇರು ಧನ ಪಡೆದು, ಅದಕ್ಕೆ ಸ್ವಲ್ಪವೂ ಡಿವಿಡೆಂಡ್ ನೀಡದೇ ಸಕಾಲದಲ್ಲಿ ಸಾಲವನ್ನೂ ನೀಡದಿರುವ ಕೇಂದ್ರ ಬ್ಯಾಂಕಿನ ಕಾರ್ಯ ವೈಖರಿಯ ಬಗ್ಗೆ ನ್ಯಾಯಾಲಯದಲ್ಲಿ ವಿಮರ್ಶಿಸಲು ಸದಸ್ಯರು ನ್ಯಾಯ

(4ನೇ ಪುಟಕ್ಕೆ)

## ಅಧಿಕಾರ ವಿಕೇಂದ್ರೀಕರಣ...

(2ನೇ ಪುಟದಿಂದ)

ತಿಳಿದ ಅವರ ಪ್ರತಿನಿಧಿಗಳೇ ಮಾಡಬೇಕು. ರಾಜ್ಯಾಡಳಿತದಲ್ಲಿ ಇಂಥ ಆಮೂಲಾಗ್ರ ಬದಲಾವಣೆ ಆಗದ ಹೊರತು ಜನತಂತ್ರಕ್ಕೆ ತಿರುಳು ಸಿಗದು. ಪಂಜಾಬಿನ ಕ್ಷೋಭೆ ಅದನ್ನೇ ಕೂಗಿ ಹೇಳುತ್ತದೆ. ಈ ಕೂಗು ನಮ್ಮನ್ನಾಳುವವರಿಗೆ ಇನ್ನೂ ಕೇಳಿಸದೆ ಇರುವುದೇ ಈ ದೇಶದ ದುರ್ದೈವ.

(ಸೌಜನ್ಯ: 'ಮುಂಗಾರು' ಸಂಪಾದಕೀಯ, ತಾ|| 12.8.86; ಮುಂದಿನ ವಾರ ಇದೇ ವಿಷಯವನ್ನು ಕುರಿತು ಇನ್ನಷ್ಟು ಚಿಂತನೆಯನ್ನೊಳಗೊಂಡ ಇನ್ನೊಂದು ಲೇಖನ— 'ರಾಜ್ಯಗಳ ಒಕ್ಕೂಟ ರಚಿಸಿ', 15.8.86ರ 'ಮುಂಗಾರು' ಸಂಪಾದಕೀಯ. —ಸಂ.)

# ಹೆಣ್ಣು ಮಕ್ಕಳಿಗೆ ಆಸ್ತಿ — ಒಂದು ವಿವೇಚನೆ

ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗ್ಗಡೆಯವರು ಕೆಲವು ದಿನಗಳ ಹಿಂದೆ ಒಂದು ಪತ್ರಿಕಾ ಹೇಳಿಕೆಯಲ್ಲಿ ಹೆಣ್ಣು ಮಕ್ಕಳಿಗೂ ಆಸ್ತಿಯಲ್ಲಿ ಹಕ್ಕು ಇದೆ ಎಂಬ ಕಾನೂನು ಮಾಡುತ್ತೇವೆಂದು ಹೇಳಿದ್ದಾರೆ. ಅವರು ಎಷ್ಟರ ಮಟ್ಟಿಗೆ ಈ ಬಗೆಗಿನ ಆಗುಹೋಗುಗಳನ್ನು ವಿಮರ್ಶಿಸಿದ್ದಾರೋ ನಾನರಿಯೆ. ಇದು ಮತ ಗಳಿಕೆಗೆ ಆಗಿದ್ದರೂ ಅದು ಈಡೇರುವುದು ಕಷ್ಟ.

ಯಾವ ಹೆಣ್ಣು ಮಗಳೂ ಎರಡು ದೋಣಿಯಲ್ಲಿ ಕಾಲಿಡಲು ಒಪ್ಪುವುದಿಲ್ಲ. 'ನಿನ್ನ ಗಂಡನ ಮನೆಯ ಆಸ್ತಿ ಕೊಡು, ತವರು ಮನೆಯ ಆಸ್ತಿ ತೆಗೆದುಕೊ' ಎಂಬ ನೀತಿಯನ್ನು ಒಪ್ಪಲಾರರು. ಸಾಮಾನ್ಯವಾಗಿ ಪ್ರತೀ ತಂದೆ ತಾಯಿಯರು ತಮಗಿಂತ ಹೆಚ್ಚು ಅನುಕೂಲ, ಐಶ್ವರ್ಯ ಇರುವ ಮನೆ ಹುಡುಕಿ ಕೊಡುತ್ತಾರೆ. ಆಗ ದೊಡ್ಡ ಆಸ್ತಿಯ ½ ಭಾಗ ಕೊಟ್ಟು ಸಣ್ಣ ಆಸ್ತಿಯಲ್ಲಿ ಭಾಗ ಪಡೆಯಲು ಆಸೆ ಪಡುವುದಿಲ್ಲ. ಇದಕ್ಕಿಂತ ಮುಖ್ಯವಾದುದೆಂದರೆ ಹತ್ತಾರು ಮೈಲಿ ದೂರದಲ್ಲಿ ಚೂರು ಚೂರು ಆಸ್ತಿ ಪಡೆದು ನಡೆಸಲು ಸಾಧ್ಯವೂ ಇಲ್ಲ. ಯಾರೂ ಅದಕ್ಕೆ ಒಪ್ಪುವುದೂ ಇಲ್ಲ.

ಇದರ ಹಿನ್ನೆಲೆ ಏನು? 'ವರದಕ್ಷಿಣೆಯನ್ನು ಕಾನೂನು ರೀತ್ಯಾನೆ ಕೊಡಿ' ಎಂತ ಹೇಳಿದ ಹಾಗಾಯಿತು. ಯಾವ ಗಂಡನೂ ಹೆಂಡತಿ ಮನೆಯಲ್ಲಿ ವಾಸಿಸುವುದಕ್ಕೆ ಒಪ್ಪಲಾರ. ಆಗ "ಹಿಸ್ಸೆಯ ಖರೀದಿಕೊಡಿ" ಎಂತ ನೇರ ವರದಕ್ಷಿಣೆ ಕೇಳಲು ಹೆಗ್ಗಡೆಯವರು ಮಾರ್ಗ ಕಲ್ಪಿಸುತ್ತಿದ್ದಾರೆ.

ಈಗಾಗಲೇ ರೈತಾಪಿ ಜನರು ಸಣ್ಣ ಅತಿ ಸಣ್ಣ ರೈತರಾಗಿದ್ದಾರೆ. ಆಸ್ತಿ ಹಿಸ್ಸೆ ಮಾಡಿಕೊಂಡು ಚೂರು ಚೂರು ಆಗಿದೆ. ಇದರಿಂದ ಇನ್ನೂ ಹೆಚ್ಚಿನವರು ಅತಿ ಸಣ್ಣ ರೈತರಾಗುತ್ತಾರೆ ಎಂಬುದನ್ನು ಅರಿಯಬೇಕು. ಇದು ರೈತರ ಮೇಲೆ ಹೆಚ್ಚಿನ ತೊಂದರೆಯಾಗುವಂಥದು. ಪೇಟೆ, ನಗರಗಳಲ್ಲಿ ಮನೆಗಳು ಇದ್ದರೆ ಅವುಗಳ ಗೋಡೆ ಒಡೆಯಬೇಕಾಗುತ್ತದೆ. ಹಾಗಿಲ್ಲದಿದ್ದಲ್ಲಿ ನೇರ ಕಾನೂನು ರೀತ್ಯಾ ವರದಕ್ಷಿಣೆ ಕೊಡಬೇಕು. ಇದು ಕೈಗಾರಿಕೆಗಳಿಗೆ, ಅಂಗಡಿ ವ್ಯಾಪಾರದವರಿಗೆ ಎಲ್ಲರಿಗೂ ವರದಕ್ಷಿಣೆ ಕೊಟ್ಟು ಬರಿಸಿಕೊಳ್ಳುವುದೇ ಈ ಕಾನೂನು.

ಈ ಬಗ್ಗೆ ಯಾವ ಪಕ್ಷದವರೂ ಚಕಾರ ಎತ್ತಿಲ್ಲ. ಬಹುಶಃ ಎಲ್ಲ ರಾಜಕೀಯ ಪಕ್ಷದವರಿಗೂ ತಾವು ವಿರೋಧಿಸಿದರೆ, ಮಹಿಳೆಯರ ಮತ ಹೋಗುತ್ತಿಂದಿರಬೇಕು. ಆದರೆ ದೇಶದ ಆರ್ಥಿಕ ಸ್ಥಿತಿ ಛಿದ್ರ ಛಿದ್ರವಾದರೂ ಚಿಂತೆಯಿಲ್ಲ, ಅಧಿಕಾರ ಪಡೆದರೆ ಸಾಕು ಎಂಬುದೇ ಇಂಥವರ ನೀತಿಯಾಗಿ ಕಾಣುತ್ತೆ.

ವಿದ್ಯಾವಂತ ಮಹಿಳೆಯರೂ ಈ ಬಗ್ಗೆ ಯೋಚಿಸಬೇಕು. ಗಂಡನ ಮನೆಯ ಆಸ್ತಿ ಬೇರೆಯವರಿಗೆ ಕೊಟ್ಟು ತವರು ಮನೆ ಆಸ್ತಿ ಪಡೆಯುವುದರಿಂದ ಆಗುವ ಲಾಭ ಏನು, ಗೊಂದಲ ಏನು? ಎಂಬುದನ್ನು. ಆದ್ದರಿಂದ ಸಾರ್ವಜನಿಕರು ಈ ಬಗ್ಗೆ ಅಭಿಪ್ರಾಯ ಸೂಚಿಸುವುದು ಒಳಿತು.

—ಕೆ.ಎಸ್. ವೀರಪ್ಪ ಗೌಡ,
ಶೃಂಗೇರಿ.

# ಅಡಿಕೆ ಬೆಳೆಗಾರರಿಗೆ ಸಾಧ್ಯವಿರುವ ಒಂದು ಸಾಮೂಹಿಕ ಮಹತ್ಕಾರ್ಯ

ಮಾನ್ಯರೆ,

ಈಚೆಗೆ ಮಂಡ್ಯ ಜಿಲ್ಲೆಯಲ್ಲಿ ಆದಿಚುಂಚನಗಿರಿ ವಿದ್ಯಾಸಂಸ್ಥೆಯವರಿಗೆ ವೈದ್ಯಕೀಯ ಕಾಲೇಜು ಸ್ಥಾಪನೆಗೆ ನೆರವಾಗಲು ಆ ಜಿಲ್ಲೆಯ ಕಬ್ಬು ಬೆಳೆಗಾರರು ತಮಗೆ ಬಂದಿರುವ ಬೋನಸ್ ಹಣದಲ್ಲಿ ಟನ್ನಿಗೆ 5 ರೂ. ಗಳಂತೆ ಒಟ್ಟು ಸುಮಾರು 20 ಲಕ್ಷ ರೂ. ಗಳಷ್ಟು ಹಣವನ್ನು ಕೊಟ್ಟಿರುವುದಾಗಿ ವರದಿಯಾಗಿದೆ.

ಬಹುಶಃ ಇದೇ ರೀತಿಯಲ್ಲಿ ನಮ್ಮ ಮಲೆನಾಡಿನ ಅಡಿಕೆ ಬೆಳೆಗಾರರು ಸಹ ಒಂದೆರಡು ವರ್ಷ, ಹಿಂದಿದ್ದ 2% ಕಮಿಶನ್ ಬದಲು ಶೇ. 1ರಂತೆ ದೇಣಿಗೆ ನೀಡಿದರೆ ಒಂದು ವರ್ಷದಲ್ಲಿ ಸುಮಾರು 30 ಲಕ್ಷ ರೂ. ಗಳಷ್ಟು ಹಣವನ್ನು ಸಂಗ್ರಹಿಸಬಹುದು. (ಶಿವಮೊಗ್ಗದಲ್ಲಿ ಅಡಿಕೆಯ ವಾರ್ಷಿಕ ವಹಿವಾಟು 30 ಕೋಟಿ ರೂ. ಇದೆ.)

ಇಂಥ ಹಣವನ್ನು ಯಾವುದಾದರೂ ಒಳ್ಳೆಯ ಉದ್ದೇಶಕ್ಕೆ ಬಳಸಬಹುದು. ಇದರಿಂದ ಅಡಿಕೆ ಬೆಳೆಗಾರರೇ ಇಂಥದೊಂದು ಒಳ್ಳೆಯ ಕೆಲಸ ಮಾಡಿದಂತಾಗುತ್ತದೆ. ಇದಕ್ಕಾಗಿ, ಸದ್ಯ ಬೇರೆ ನಾಯಕತ್ವದ ಕೊರತೆ ಇರುವುದರಿಂದ, ಆರ್.ಎಂ.ಸಿ. ಅಧ್ಯಕ್ಷರ ಅಧ್ಯಕ್ಷತೆಯಲ್ಲೇ ಒಂದು ಸಮಿತಿ ಮಾಡಿ ಈ ಕೆಲಸ ಮಾಡಬಹುದಾಗಿ ನನ್ನ ಅಭಿಪ್ರಾಯ.

ಮಲೆನಾಡಿನ ಅಡಿಕೆ ಬೆಳೆಗಾರರು ಈ ಕುರಿತು ಯೋಚನೆ ಮಾಡಲೆಂದು ಆಶಿಸುತ್ತೇನೆ.

ಹೆಚ್. ಸಿ. ಜಯಂತ್,
ಹೆಗ್ಗಾರು, ನಿಲುವಾಗಿಲು.

# ಕಾಫಿ ಕೊಳೆ ರೋಗ ಹತೋಟಿ ಕ್ರಮ

ಕಳೆದ 15 ದಿನಗಳಿಂದ ಎಡೆಬಿಡದೆ ಸುರಿದ ಮಳೆ ಮತ್ತು ವಾತಾವರಣದಲ್ಲಿನ ಅಧಿಕ ಶೈತ್ಯಾಂಶದ ದೆಸೆಯಿಂದ ಕಾಫಿತೋಟಗಳಲ್ಲಿ ಕೊಳೆರೋಗ ಗುಂಡು ರಂಧ್ರ ಕೊರಕಗಳು (ರೋಬಸ್ಟಾದಲ್ಲಿ) ಹೆಚ್ಚುವ ಮತ್ತು ಕಾಫಿ ಕಾಯಿ ಉದುರುವ ಸಂಭವವಿದ್ದು, ಕಾಫಿ ಬೆಳೆಗಾರರು ಈ ಕೆಳಕಂಡ ಹತೋಟಿ ಕ್ರಮಗಳನ್ನು ಅನುಸರಿಸಬೇಕೆಂದು ಕಾಫಿ ಮಂಡಳಿ ಕೋರಿದೆ.

1) ರೋಗ ಪೀಡಿತ ಎಲೆ ಮತ್ತು ರೆಕ್ಕೆಗಳನ್ನು ಕೂಡಲೆ ಕಿತ್ತು ಸುಡುವುದು 2) ಚೆನ್ನಾಗಿ ಬೆಳಕು ಬೀಳುವಂತೆ, ಒತ್ತಾಗಿರುವ ಕೆಳಭಾಗದಲ್ಲಿರುವ ನೆರಳನ್ನು ಕಡಿಮೆ ಮಾಡುವುದು. 3) ಭೂಮಿಯಲ್ಲಿನ ಶೈತ್ಯಾಂಶ ಕಡಿಮೆ ಮಾಡಲು ಚರಂಡಿ ಮತ್ತು ತೊಟ್ಟಿಲು ಗುಂಡಿಗಳನ್ನು ತೆಗೆಯುವುದು, ಹಾಗೂ ಕೊಳೆ ರೋಗಕ್ಕೆ— ಮಳೆ ಬಿಡುವು ಕೊಟ್ಟಾಗ— ಶೇ. 1ರ ಬೋರ್ಡೋ ಮಿಶ್ರಣವನ್ನು ಸಿಂಪಡಿಸುವುದು. 5) (ಗುಂಡು ಕೊರಕ ಹೆಚ್ಚಿದ್ದಕಡೆ) ಸಾಕಷ್ಟು ಪ್ರಮಾಣದಲ್ಲಿ ಗೊಬ್ಬರ, ಅದರಲ್ಲೂ ಪೊಟ್ಯಾಶ್ ನೀಡಿಕೆಯಿಂದ ಹೊಸ ಚಿಗುರು ವೇಗವಾಗಿ ಬೆಳೆಯುತ್ತದೆ.

ಮಳೆಗಾಲದ ನಂತರದ ಗೊಬ್ಬರ ಹಾಕುವ ಮತ್ತು ಬೋರ್ಡೋ ಮಿಶ್ರಣ ಸಿಂಪಡಿಸುವ ಕಾರ್ಯಗಳನ್ನು ಸಕಾಲದಲ್ಲಿ ಕೈಗೊಂಡಲ್ಲಿ ಎಲೆ ಚುಕ್ಕೆ ರೋಗವನ್ನು ಹತೋಟಿಯಲ್ಲಿಡಲೂ ಮತ್ತು ಕಾಫೀ ಫಸಲು ಚೆನ್ನಾಗಿ ಬಲಿಯಲೂ ಅವಕಾಶವಾಗುತ್ತದೆ.

# ಸಹಕಾರ ಸಂಘ—ಡಿ.ಸಿ.ಸಿ. ಬ್ಯಾಂಕ್ ವಿರಸ

(3ನೇ ಪುಟದಿಂದ)
ವಾದಿಗಳಿಗೆ ವಕಾಲತ್ತು ಸಲ್ಲಿಸಿದ್ದಾರೆ.

ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಧೋರಣೆ ವಿರಸಕ್ಕೆ ಕಾರಣವಾಗಿರುತ್ತೆ. ಇನ್ನಾದರೂ ಅವರು ತಮ್ಮ ನಿಲುವನ್ನು ಪುನರ್ವಿಮರ್ಶಿಸಿ, ಈ ಸಹಕಾರಿ ವ್ಯವಸ್ಥೆ ಛಿದ್ರವಾಗಲು, ಅಥವಾ ಪರಸ್ಪರ ಅಪ ನಂಬಿಕೆ, ಹಗೆಗಳಿಂದ ಅವಸಾನದ ಹಾದಿ ಹಿಡಿಯುವಂತಾಗಲು ಅವಕಾಶ ಕೊಡಬಾರದಾಗಿ ಎಲ್ಲ ಸಹಕಾರಿಗಳ ಅಪೇಕ್ಷೆ.

—ಜೆ.ಪಿ. ನೀಲಕಂಠ ಭಟ್ಟ,
ಅಧ್ಯಕ್ಷ, ವ್ಯ.ಸೇ.ಸ. ಸಂಘ,
ಹಂಚರವುರ.

[ಇದೊಂದು ಜಟಿಲವಾದ ವಿಚಾರವೆಂಬಂತೆ ತೋರುತ್ತದೆ. ಡಿ.ಸಿ.ಸಿ. ಬ್ಯಾಂಕಿನ ಈ ಕ್ರಮದ ಹಿಂದಿನ ಉದ್ದೇಶವೇನು? ಸಹಕಾರ ಸಂಘಗಳಲ್ಲಿನ 'ಮುಲುಗಡೆ' ವ್ಯವಹಾರಗಳನ್ನು ತಡೆಯುವುದಾಗಿದ್ದಲ್ಲಿ ಅದಕ್ಕೆ ತನಿಖೆ,ಆಡಿಟ್ ಮುಂತಾದ ಹತೋಟಿಗಳಿವೆಯಲ್ಲ? ಇನ್ನಿತರ ರೀತಿಯಲ್ಲೂ ಆಡಳಿತಾತ್ಮಕವಾಗಿಯೂ ಸಹ ಸಾಕಷ್ಟು ಹತೋಟಿ ಇದೆಯಲ್ಲ? ಡಿ.ಸಿ.ಸಿ. ಬ್ಯಾಂಕಿಗೆ ನಿಜವಾಗಿ ಏನು ಬೇಕಾಗಿದೆ? ಇದರಲ್ಲಿ ಪಕ್ಷ ರಾಜಕೀಯದ ಉದ್ದೇಶಗಳೇನೂ ಇಲ್ಲವೆ? ಒಂದು ವೇಳೆ ರೈತರ ಹಿತ ದೃಷ್ಟಿಯಿಂದ ಇಂಥದೊಂದು ಕ್ರಮ ಅನಿವಾರ್ಯವಿದ್ದಲ್ಲಿ, ದುಡುಕದೆ, ಮೊದಲಿಗೇ ಬಲಪ್ರಯೋಗಕ್ಕಿಳಿಯದೆ ಸಂಬಂಧಪಟ್ಟವರೆಲ್ಲರನ್ನೂ ವಿಶ್ವಾಸಕ್ಕೆ ತೆಗೆದುಕೊಂಡು ಅದನ್ನೂ ಮನವರಿಕೆ ಮಾರ್ಗವನ್ನನುಸರಿಸುವುದು ವಿಹಿತವಲ್ಲವೆ? ಹಾಗಿಲ್ಲವಾದರೆ ಇದು ಎರಡೂ ಕಡೆಯವರಿಗೂ ಒಂದು ಪ್ರತಿಷ್ಠೆಯ ಪ್ರಶ್ನೆಯಾಗಿ ಅನಗತ್ಯ ಜಂಜಾಟ, ನಷ್ಟ ಮತ್ತು ನಿರುತ್ಸಾಹಗಳಿಗೆ ಕಾರಣವಾಗಬಹುದಲ್ಲವೆ? ಸಂಬಂಧಪಟ್ಟವರೆಲ್ಲ (ಎರಡೂ ಕಡೆಯವರೂ) ತೆರೆದ ಮನಸ್ಸಿನಿಂದ ಇನ್ನಷ್ಟು ಯೋಚಿಸುವುದು ಒಳ್ಳೆಯದಲ್ಲವೆ? —ಸಂಪಾದಕ

# ಭಂಡಿಗಡಿ ಭಾಗದಲ್ಲಿಜನ-ವಾಹನ ಸಂಚಾರಕ್ಕೆ ಅಡ್ಡಿಯಾಗಿರುವ ಸೇತುವೆ, ಮೋರಿಗಳು

(ನರದಿ: 'ಮಲ್ನಾಡ್ ನ್ಯೂಸ್')

ಭಂಡಿಗಡಿ: ಇಲ್ಲಿಂದ ನಿಲುವಾಗಿಲಿಗೆ ಹೋಗುವ ಲೋಕೋಪಯೋಗಿ ಇಲಾಖೆ ರಸ್ತೆಯಲ್ಲಿ ಕೋಡ್ಲಾಳು ಎಂಬಲ್ಲಿನ ಮೋರಿಯ ಮಧ್ಯದ ಎರಡು ಕಡೆ ಮಣ್ಣು, ಕಲ್ಲು ಕುಸಿದ ಪರಿಣಾಮ ಅಲ್ಲಿ ವಾಹನ ಓಡಾಟ ಅಸಾಧ್ಯವಾಗಿದೆ. ಕುಟುಂಬ ಯೋಜನಾ ಶಸ್ತ್ರ ಚಿಕಿತ್ಸೆಗೊಳಗಾದ ಮಹಿಳೆಯೊಬ್ಬರನ್ನು ಈಚೆಗೆ ಆ ದಾರಿಯಲ್ಲಿ ಕರೆದೊಯ್ದು ವಾಹನ ಆ ಸ್ಥಳ ದಾಟಲು ತೀರಾ ಪ್ರಯಾಸ ಪಡಬೇಕಾಯಿತೆನ್ನಲಾಗಿದೆ.

ನಿರ್ಮಾಣದ ವೇಳೆ ಕಳಪೆ ಕೆಲಸದ ಕಾರಣದಿಂದ ಊರವರ ತೀವ್ರ ಪ್ರತಿಭಟನೆಯಿಂದಾಗಿ ಮೂರು ಬಾರಿ ಹೊಸದಾಗಿ ಕಟ್ಟಿದ, ಇಲ್ಲಿಗೆ ಸಮೀಪದ ಮಲ್ಲಿಗೆಮನೆ ರಸ್ತೆಯ ಒಂದು ಮೋರಿ ಸಂಚಾರಕ್ಕೆ ಅಯೋಗ್ಯ ಎನಿಸಿದೆ. (ಪಂಚಾಯ್ತಿ ರಸ್ತೆ)

ಈಗಲೂ ಪಾದಚಾರಿಗಳು ಮತ್ತು ಗಾಡಿಗಳು ಓಡಾಡುವ ಭಂಡಿಗಡಿ – ಹಾಲ್ಮುತ್ತೂರು ಹಳೇ ರಸ್ತೆ ನಡುವೆ ಕೆಳಕೊಪ್ಪ ಬಳಿ ಕಳೆದ ವರ್ಷ ನಿರ್ಮಾಣ ಮುಗಿದ ಕಾಲು ಸೇತುವೆ ಆರಂಭದಲ್ಲೇ ಬಿರುಕು ಬಿಟ್ಟಿತ್ತು. ಸೇತುವೆಯ ಎರಡೂ ಪಕ್ಕದಲ್ಲಿ ದಂಡೆ ಸರಿಯಾಗಿ ಏರಿಸದೆ ಕಾಲು ಸೇತುವೆಯ ಮೇಲೆ ಗಾಡಿ ಹಾದು ಹೋಗಲಾಗದ ಸ್ಥಿತಿ ಇದೆ. ಕಾಲು ಸೇತುವೆಯಿಂದ ಸ್ವಲ್ಪ ಮುಂದಿರುವ ಇನ್ನೊಂದು ಮೋರಿ ಈಗ ಬಹಳ ದುಃಸ್ಥಿತಿ ತಲುಪಿದ್ದು, ತೀರಾ ಅಪಾಯಕಾರಿಯಾಗಿದೆ. ಈ ಮೂರು ಮೋರಿ ಮತ್ತು ಸೇತುವೆಗಳ ಶೀಘ್ರ ದುರಸ್ತಿಗಾಗಿ ಈ ಭಾಗದ ಜನ ಒತ್ತಾಯಿಸಿದ್ದಾರೆ.

ನಂ. ಸಿಆರ್‌ಸಿ : ಸಿಆರ್ : 64: 85–86

ತಹಸೀಲ್ದಾರ್‌ರವರ ಕಛೇರಿ,
ಕೊಪ್ಪ ತಾಲ್ಲೂಕು,
ಕೊಪ್ಪ, ದಿನಾಂಕ : 19–8–1986.

## ಪ್ರ ಕ ಟ ಣೆ

ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರುವುದೇನೆಂದರೆ, ಚಿಕ್ಕಮಗಳೂರು ಜಿಲ್ಲೆ, ಕೊಪ್ಪ ತಾ|| ಕೆಸವೆ ಗ್ರಾಮದ ವಾಸಿ ಸಿ.ಟಿ. ಯೋಗೇಶ ಬಿನ್ ಸಿ. ಎ. ತಮ್ಮಯ್ಯ, ಇವರಿಗೆ ಕಾಫಿ ಸಿಆರ್‌ಸಿ ಸಂಖ್ಯೆ 30/85–86ರಂತೆ ಕೆಸವೇ ಗ್ರಾಮದ ಸ. ನಂ. 57ರಲ್ಲಿ 4 ಎಕರೆ 20 ಗುಂಟೆ ಪ್ರದೇಶಕ್ಕೆ ಕಾಫಿ ನೋಂದಣಿ ದೃಢೀಕರಣ ಪತ್ರ ನೀಡಿದ್ದು, ಸದ್ರಿ ದೃಢೀಕರಣ ಪತ್ರವೂ ಕಾರಣಾಂತರದಿಂದ ಕಳೆದು ಹೋಗಿರುವುದರಿಂದ ಈ ದೃಢೀಕರಣ ಪತ್ರದ ನಕಲು ಕೊಡುವಂತೆ ಕೋರಿರುತ್ತಾರೆ.

ಆದ್ದರಿಂದ ಮೇಲ್ಕಂಡ ಕಾಫಿ ನೋಂದಣಿ ದೃಢೀಕರಣ ಪತ್ರದ ನಕಲು ಕೊಡುವಲ್ಲಿ ಯಾರಿಂದಲಾದರೂ ತಕರಾರು ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ 15 ದಿವಸಗಳೊಳಗೆ ಲಿಖಿತ ಮೂಲಕ ಈ ಕಾರ್ಯಾಲಯಕ್ಕೆ ತಿಳಿಸಲು ಕೋರಲಾಗಿದೆ.

(ಸಹಿ)
ತಹಸೀಲ್ದಾರ್,
ಕೊಪ್ಪ ತಾಲ್ಲೂಕು

## ಕೊಡುಗೆ

ಕೊಪ್ಪ: ಇಲ್ಲಿನ ಸಂತ ಜೋಸೆಫ್ ಹಿ. ಪ್ರಾ. ಶಾಲೆಯ 25 ಮಂದಿ ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯೋತ್ಸವದ ಮುನ್ನಾ ದಿನ ಸಮವಸ್ತ್ರಗಳನ್ನು ನೀಡಿದ ಶ್ರೀಮತಿ ಮತ್ತು ಶ್ರೀ ಪಾಸ್ಕಲ್ ಡಯಾಸ್‌ರವರಿಗೆ ಶಾಲಾ ಆಡಳಿತ ವರ್ಗ ಕೃತಜ್ಞತೆ ಸಲ್ಲಿಸಿದೆ.



ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ದೀಪಟಿಗೆ ಅಚ್ಚುಕೂಟ, ಕೊಪ್ಪ